





**(ಅವತೀರ್ಣ - ಮಕ್ಕಾದಲ್ಲಿ)**

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ

1. ಪ್ರಾತಃಕಾಲದ ಆಣೆ,

وَالْفَجْرِ ۝١

2. ದಶರಾತ್ರಿಗಳ ಆಣೆ,

وَلَيَالٍ عَشْرٍ ۝٢

3. ಸಮ-ವಿಷಮಗಳ ಆಣೆ,

وَّالشَّفْعِ وَالْوَتْرِ ۝٣

4. ಮತ್ತು ಅಗಲುತ್ತಿರುವ ರಾತ್ರಿಯ ಆಣೆ.

وَالَّيْلِ اِذَا يَسْرِ ۝٤

5. ಇದರಲ್ಲಿ ಬುದ್ಧಿಜೀವಿಗಳಿಗೇನಾದರೂ ಆಣೆ ಇದೆಯೇ?[1]

هَلْ فِيْ ذٰلِكَ قَسَمٌ لِّذِيْ حِجْرٍ ۝٥

6-7. ನಿಮ್ಮ ಪ್ರಭು ಉನ್ನತ ಸ್ತಂಭಗಳ ಆದ್‌ಇರಮ್‌ನವರೊಂದಿಗೆ ಹೇಗೆ ವರ್ತಿಸಿದನೆಂಬುದನ್ನು ನೀವು ನೋಡಲಿಲ್ಲವೇ?

اَلَمْ تَرَ كَيْفَ فَعَلَ رَبُّكَ بِعَادٍ ۝٦
اِرَمَ ذَاتِ الْعِمَادِ ۝٧

8. ಅವರಂತಹ ಯಾವ ಜನಾಂಗವೂ ಜಗತ್ತಿನ ನಾಡುಗಳಲ್ಲಿ ಸೃಷ್ಟಿಸಲ್ಪಟ್ಟಿರಲಿಲ್ಲ.

الَّتِيْ لَمْ يُخْلَقْ مِثْلُهَا فِي الْبِلَادِ ۝٨

9. ಕಣಿವೆಗಳಲ್ಲಿ ಬಂಡೆಗಳನ್ನು ಕೊರೆದಿದ್ದ ಸಮೂದರೊಂದಿಗೆ-

وَثَمُوْدَ الَّذِيْنَ جَابُوا الصَّخْرَ بِالْوَادِ ۝٩

10. ಮತ್ತು ಮೊಳೆಗಳವನಾದ ಫಿರ್‌ಔನನೊಂದಿಗೆ-

وَفِرْعَوْنَ ذِي الْاَوْتَادِ ۝١٠

11. (ಅವನು ಹೇಗೆ ವರ್ತಿಸಿದನೆಂಬುದನ್ನು ನೀವು ನೋಡಲಿಲ್ಲವೇ?). ಇವರು ಜಗತ್ತಿನ ನಾಡುಗಳಲ್ಲಿ ವಿದ್ರೋಹವೆಸಗಿದವರಾಗಿದ್ದರು-

الَّذِيْنَ طَغَوْا فِي الْبِلَادِ ۝١١

1. ಮುಂದಿನ ಸೂಕ್ತಗಳನ್ನು ಗಮನಿಸಿದರೆ ಪ್ರವಾದಿವರ್ಯರು(ಸ) ಮತ್ತು ಸತ್ಯನಿಷೇಧಿಗಳ ನಡುವೆ ಪರಲೋಕದ ಶಿಕ್ಷೆ-ರಕ್ಷೆಗಳ ಬಗ್ಗೆ ಚರ್ಚೆ ನಡೆಯುತ್ತಿತ್ತೆಂದು ಸ್ಪಷ್ಟವಾಗಿ ತಿಳಿದುಬರುತ್ತದೆ. ಪ್ರವಾದಿವರ್ಯರು(ಸ) ಅದನ್ನು ಸಾಬೀತುಪಡಿಸಿದರೆ ಸತ್ಯನಿಷೇಧಿಗಳು ಅದನ್ನು ನಿರಾಕರಿಸುತ್ತಿದ್ದರು. ಈ ಕುರಿತು ನಾಲ್ಕು ವಿಷಯಗಳ ಆಣೆ ಹಾಕಿದ ನಂತರ, “ಈ ಬಗ್ಗೆ ಸಾಕ್ಷ್ಯವಹಿಸಲು ಇದರ ನಂತರ ಮತ್ತಾವುದೇ ಆಣೆಯ ಔಚಿತ್ಯವಿದೆಯೇ?” ಎಂದು ಹೇಳಲಾಗುತ್ತಿದೆ.

12. ಮತ್ತು ಅಲ್ಲಿ ಬಹಳಷ್ಟು ಕ್ಷೋಭೆ ಹರಡಿದ್ದರು.

فَأَكْثَرُوا فِيهَا الْفَسَادَ ﴿١٢﴾

13. ಕೊನೆಗೆ ನಿಮ್ಮ ಪ್ರಭು ಅವರ ಮೇಲೆ ಯಾತನೆಯ ಕೊರಡೆಯನ್ನು ಬಾರಿಸಿಬಿಟ್ಟನು.

فَصَبَّ عَلَيْهِمْ رَبُّكَ سَوْطَ عَذَابٍ ﴿١٣﴾

14. ವಾಸ್ತವದಲ್ಲಿ ನಿಮ್ಮ ಪ್ರಭು ಹೊಂಚು ಹಾಕುತ್ತಿದ್ದಾನೆ.[2]

إِنَّ رَبَّكَ لَبِالْمِرْصَادِ ﴿١٤﴾

15. ಆದರೆ ಮಾನವನ ಅವಸ್ಥೆ ಹೀಗಿದೆ: ಅವನ ಪ್ರಭು ಅವನನ್ನು ಪರೀಕ್ಷೆ ಗೊಳಪಡಿಸಿದಾಗ ಮತ್ತು ಅವನಿಗೆ ಗೌರವ ಹಾಗೂ ಅನುಗ್ರಹ ದಯಪಾಲಿಸಿದಾಗ ಅವನು, ನನ್ನ ಪ್ರಭು ನನ್ನನ್ನು ಸನ್ಮಾನಿತನಾಗಿ ಮಾಡಿದನೆಂದು ಹೇಳುತ್ತಾನೆ.

فَأَمَّا الْإِنْسَانُ إِذَا مَا ابْتَلَاهُ رَبُّهُ فَأَكْرَمَهُ وَنَعَّمَهُ فَيَقُولُ رَبِّي أَكْرَمَنِ ﴿١٥﴾

16. ಮತ್ತು ಅವನನ್ನು ಪರೀಕ್ಷೆಗೊಳಪಡಿಸಿದಾಗ ಮತ್ತು ಅವನ ಪಾಲಿಗೆ ಅವನ ಜೀವನಾಧಾರವನ್ನು ಸೀಮಿತಗೊಳಿಸಿದಾಗ ನನ್ನ ಪ್ರಭು ನನ್ನನ್ನು ಅಪಮಾನಿಸಿದನೆಂದು ಹೇಳುತ್ತಾನೆ.[3]

وَأَمَّا إِذَا مَا ابْتَلَاهُ فَقَدَرَ عَلَيْهِ رِزْقَهُ فَيَقُولُ رَبِّي أَهَانَنِ ﴿١٦﴾

17. ಖಂಡಿತ ಅಲ್ಲ! ವಾಸ್ತವದಲ್ಲಿ ನೀವು ಅನಾಥರನ್ನು ಗೌರವದಿಂದ ಕಾಣುವುದಿಲ್ಲ-

كَلَّا بَلْ لَا تُكْرِمُونَ الْيَتِيمَ ﴿١٧﴾

18. ಬಡವನಿಗೆ ಉಣಬಡಿಸುವಂತೆ ಪರಸ್ಪರರನ್ನು ಪ್ರೇರೇಪಿಸುವುದಿಲ್ಲ-

وَلَا تَحَاضُّونَ عَلَىٰ طَعَامِ الْمِسْكِينِ ﴿١٨﴾

19. ವಾರೀಸು ಸೊತ್ತನ್ನೆಲ್ಲ ಕಬಳಿಸಿ ಬಿಡುತ್ತೀರಿ-

وَتَأْكُلُونَ التُّرَاثَ أَكْلًا لَمًّا ﴿١٩﴾

20. ಮತ್ತು ಸಂಪತ್ತನ್ನು ಅತಿಯಾಗಿ ಪ್ರೀತಿಸುತ್ತೀರಿ.

وَتُحِبُّونَ الْمَالَ حُبًّا جَمًّا ﴿٢٠﴾

21. ಖಂಡಿತ ಅಲ್ಲ![4] ಭೂಮಿಯು ನಿರಂತರ ಗುದ್ದಿ ಪುಡಿಗುಟ್ಟಲ್ಪಟ್ಟಾಗ-

كَلَّا إِذَا دُكَّتِ الْأَرْضُ دَكًّا دَكًّا ﴿٢١﴾

---

2. ಹೊಂಚು ಹಾಕುವುದೆಂದರೆ ಯಾರನ್ನಾದರೂ ಕಾಯುತ್ತಾ ಅವಿತುಕೊಂಡು ಕುಳಿತಿರುವುದು ಮತ್ತು ಅವನು ಅಲ್ಲಿಗೆ ಬಂದು ತಲಪಿದೊಡನೆ ಹಠಾತ್ತನೆ ಅವರ ಮೇಲೆ ಎರಗಿ ಬಿಡುವುದು. ತನ್ನ ಪರಿಣಾಮದ ಬಗ್ಗೆ ಅಶ್ರದ್ಧನಾಗಿರುವವನು ಆ ಪ್ರದೇಶದ ಮೂಲಕ ನಿಶ್ಚಿಂತನಾಗಿ ಸಾಗುತ್ತಿರುವಾಗಲೇ ಇದ್ದಕ್ಕಿದ್ದಂತೆ ಬಲಿಯಾಗಿ ಬಿಡುತ್ತಾನೆ. ಅಲ್ಲಾಹನಿಗೆ ಪ್ರತಿಯಾಗಿ ಲೋಕದಲ್ಲಿ ಕ್ಷೋಭೆಯ ಬಿರುಗಾಳಿಯನ್ನೆಬ್ಬಿಸುವ ಅಕ್ರಮಿಗಳ ಅವಸ್ಥೆಯೂ ಹೀಗೆಯೇ ಇರುತ್ತದೆ. ಅವರ ಕೆಲಸಗಳನ್ನೆಲ್ಲಾ ನೋಡುವ ದೇವನೊಬ್ಬನಿದ್ದಾನೆಂಬ ಪರಿವೆಯೇ ಅವರಿಗಿರುವುದಿಲ್ಲ. ಅವರು ಬಹಳ ನಿರ್ಭಯವಾಗಿ ದಿನೇ ದಿನೇ ಹೆಚ್ಚೆಚ್ಚು ದುಷ್ಕೃತ್ಯಗಳನ್ನು ಮಾಡುತ್ತಾ ಹೋಗುತ್ತಾರೆ. ಕೊನೆಗೆ ಅಲ್ಲಾಹನು ಮೀರಲು ಬಿಡದ ಆ ಚರಮ ಹಂತಕ್ಕೆ ತಲಪಿದಾಗ ಹಠಾತ್ತನೆ ಅಲ್ಲಾಹನ ಯಾತನೆಯ ಹೊಡೆತ ಅವರ ಮೇಲೆ ಬೀಳುತ್ತದೆ.
3. ಅರ್ಥಾತ್- ಮಾನವನ ಭೌತಿಕವಾದಿ ದೃಷ್ಟಿಕೋನ ಹೀಗಿರುತ್ತದೆ- ಈ ಲೋಕದ ಸಿರಿಸಂಪತ್ತು ಮತ್ತು ಸ್ಥಾನಾಧಿಕಾರಗಳನ್ನು ಅವನು ಗೌರವವೆಂದೂ ಅದು ಸಿಗದಿರುವುದನ್ನು ನಿಂದ್ಯತೆಯೆಂದೂ ಅವನು ಭಾವಿಸುತ್ತಾನೆ. ಆದರೆ ವಾಸ್ತವಿಕತೆಯೇನೆಂದರೆ ಅಲ್ಲಾಹನು ಭೂಮಿಯಲ್ಲಿ ಯಾರಿಗೆ ಏನನ್ನು ದಯಪಾಲಿಸಿದ್ದರೂ ಅದು ಪರೀಕ್ಷಾರ್ಥವಾಗಿದೆ. ಸಿರಿಸಂಪತ್ತು ಮತ್ತು ಅಧಿಕಾರವೂ ಪರೀಕ್ಷಾರ್ಥವಾಗಿದೆ. ಬಡತನವೂ ಪರೀಕ್ಷೆಗಾಗಿಯೇ ಇದೆ. ಆದರೆ ಅವರಿಗದು ತಿಳಿಯುವುದಿಲ್ಲ.
4. ಲೋಕದ ಜೀವನದಲ್ಲಿ ಇದೆಲ್ಲವನ್ನೂ ಮಾಡುತ್ತಿರೋಣ. ಅದರ ಬಗ್ಗೆ ವಿಚಾರಣೆ ನಡೆಯುವ ಸಮಯ ಎಂದೂ ಬರಲಾರದು ಎಂಬ ನಿಮ್ಮ ಭಾವನೆ ಸರಿಯಲ್ಲ.

22. ಮತ್ತು ದೇವಚರರು ಸಾಲುಸಾಲಾಗಿ ನಿಂತಿರುವ ಸ್ಥಿತಿಯಲ್ಲಿ ನಿಮ್ಮ ಪ್ರಭು ಆಗಮಿಸುವಾಗ.

وَّجَآءَ رَبُّكَ وَالْمَلَكُ صَفًّا صَفًّا ﴿٢٢﴾

23. ಅಂದು ನರಕವನ್ನು ಮುಂದೆ ತರಲಾಗುವುದು. ಅಂದು ಮಾನವನಿಗೆ ಮನವರಿಕೆಯಾಗುವುದು. ಅಂದು ಅವನು ತಿಳಿಯುವುದರಿಂದೇನು ಫಲ?

وَجِايْٓءَ يَوْمَئِذٍۭ بِجَهَنَّمَ ۙ يَوْمَئِذٍ يَّتَذَكَّرُ الْاِنْسَانُ وَاَنّٰى لَهُ الذِّكْرٰى ﴿٢٣﴾

24. ಅವನು, "ಅಯ್ಯೋ! ನಾನು ನನ್ನ ಈ ಜೀವನಕ್ಕಾಗಿ ಮೊದಲೇ ಸಿದ್ಧತೆ ಮಾಡುತ್ತಿದ್ದರೆ!" ಎಂದು ಹೇಳುವನು.

يَقُوْلُ يٰلَيْتَنِيْ قَدَّمْتُ لِحَيَاتِيْ ﴿٢٤﴾

25. ಅಂದು ಅಲ್ಲಾಹನು ಕೊಡುವಂತಹ ಯಾತನೆಯನ್ನು ಕೊಡಬಲ್ಲವರು ಬೇರಾರೂ ಇಲ್ಲ.

فَيَوْمَئِذٍ لَّا يُعَذِّبُ عَذَابَهٗٓ اَحَدٌ ﴿٢٥﴾

26. ಅಲ್ಲಾಹನು ಬಂಧಿಸುವ ರೀತಿಯಲ್ಲಿ ಬಂಧಿಸುವವನೂ ಯಾರೂ ಇಲ್ಲ.

وَّلَا يُوْثِقُ وَثَاقَهٗٓ اَحَدٌ ﴿٢٦﴾

27. (ಇನ್ನೊಂದು ಕಡೆಯಿಂದ ಹೀಗೆ ಅಪ್ಪಣೆಯಾಗುವುದು;) "ಓ ಶಾಂತಚಿತ್ತವೇ![5]

يٰٓاَيَّتُهَا النَّفْسُ الْمُطْمَئِنَّةُ ﴿٢٧﴾

28. ನೀನು (ನಿನ್ನ ಸದ್ಗತಿಯಿಂದ) ಸಂತುಷ್ಟನೂ (ನಿನ್ನ ಪ್ರಭುವಿನ ಬಳಿ) ಮೆಚ್ಚುಗೆಗೆ ಪಾತ್ರನೂ ಆಗಿರುವ ಸ್ಥಿತಿಯಲ್ಲಿ ನಿನ್ನ ಪ್ರಭುವಿನ ಬಳಿಗೆ ನಡೆ.

ارْجِعِيْٓ اِلٰى رَبِّكِ رَاضِيَةً مَّرْضِيَّةً ﴿٢٨﴾

29. ನನ್ನ (ಸಜ್ಜನ) ದಾಸರೊಂದಿಗೆ ಸೇರಿಕೋ-

فَادْخُلِيْ فِيْ عِبٰدِيْ ﴿٢٩﴾

30. ಮತ್ತು ನನ್ನ ಸ್ವರ್ಗದೊಳಗೆ ಪ್ರವೇಶಿಸು."

وَادْخُلِيْ جَنَّتِيْ ﴿٣٠﴾ ع ١٤

---

5. ಶಾಂತ ಚಿತ್ತವೆಂದರೆ (ನಫ್ಸ್ ಮುತ್‌ಮಇನ್ನ್) ಯಾವುದೇ ಸಂಶಯಕ್ಕೆಡೆ ಕೊಡದೆ ಪೂರ್ಣ ಸಂತೃಪ್ತಿಯೊಂದಿಗೆ ಶಾಂತಚಿತ್ತದಿಂದ ಏಕಮೇವಾದ್ವಿತೀಯನಾದ ಅಲ್ಲಾಹನನ್ನು ತನ್ನ ಪ್ರಭುವೆಂದೂ ಪ್ರವಾದಿಗಳು ತಂದ ಸತ್ಯಧರ್ಮವನ್ನು ತನ್ನ ಧರ್ಮವೆಂದೂ ಭಾವಿಸಿದ ವ್ಯಕ್ತಿಯಾಗಿದ್ದಾನೆ.